

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 177 |
| ವಿಧಾನ ಪರಿಷತ್ತ್ ಸದಸ್ಯರ ಹೆಸರು | : | ಶ್ರೀ ಎನ್. ಅಪ್ಪಾಜಿಗೌಡ |
| ಉತ್ತರಿಸುವ ದಿನಾಂಕ | : | 07-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಸಮಾಜ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ಜಿಲ್ಲಾ ವ್ಯಾಪ್ತಿಯಲ್ಲಿ ಅಪೂರ್ಣಗೊಂಡಿರುವ ಡಾ॥ ಬಿ.ಆರ್ ಅಂಬೇಡ್ಕರ್ ಭವನಗಳು ಮತ್ತು ಬಾಬು ಜಗಜೀವನ್ ರಾಮ್ ಭವನಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | 2008-09 ರಿಂದ ಈವರೆವಿಗೂ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಮಂಡ್ಯ ಜಿಲ್ಲೆಗೆ 179 ಭವನಗಳನ್ನು ಮಂಜೂರು ಮಾಡಲಾಗಿರುತ್ತದೆ. ಈ ಪೈಕಿ 73 ಭವನಗಳು ಪೂರ್ಣಗೊಂಡಿದ್ದು, 106 ಭವನಗಳು ಅಪೂರ್ಣಗೊಂಡಿರುತ್ತವೆ. ತಾಲ್ಲೂಕುವಾರು ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಆ) | ಈ ಭವನಗಳು ಯಾವ ಅವಧಿಯಿಂದ ಅಪೂರ್ಣಗೊಂಡಿವೆ; ಯಾವ ಅವಧಿಯೊಳಗೆ ಪೂರ್ಣಗೊಳಿಸಲಾಗುವುದು; | ಅಪೂರ್ಣಗೊಂಡಿರುವ 106 ಭವನಗಳ ಪೈಕಿ 75 ಭವನಗಳ ನಿರ್ಮಾಣ ಕಾಮಗಾರಿಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿದ್ದು, 19 ಭವನಗಳ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಬೇಕಾರುತ್ತದೆ. ಉಳಿದಂತೆ, 7 ಭವನಗಳಿಗೆ ಸಂಬಂಧಿಸಿದಂತೆ ನಿವೇಶನ ಸಮಸ್ಯೆಗಳಿದ್ದು, ಬಾಕಿ 5 ಗ್ರಾಮಗಳಲ್ಲಿ ಹೋಬಳಿ ಮಟ್ಟದ ಭವನಗಳನ್ನು ನಿರ್ಮಾಣ ಮಾಡಲು ಜಿಲ್ಲಾ ಮಟ್ಟದಲ್ಲಿ ಪ್ರಸ್ತಾವನೆಗಳು ಸ್ವೀಕೃತಗೊಂಡಿರುತ್ತವೆ.<br><br>ಭವನಗಳ ಭೌತಿಕ ಮತ್ತು ಆರ್ಥಿಕ ಪ್ರಗತಿಯನ್ನು ಆಧರಿಸಿ ಮಂಜೂರಾತಿ ಮೊತ್ತಕ್ಕೆ ಅನುಗುಣವಾಗಿ, ಬಾಕಿ ಅನುದಾನ ಬಿಡುಗಡೆ ಮಾಡಿ, ಕಾಮಗಾರಿಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |
| ಇ) | ಈ ಬಗ್ಗೆ ಸರ್ಕಾರದ ಮುಂದಿನ ಕ್ರಮವೇನು? | |

ಸಕಇ 464 ಪಕವಿ 2020

(ಬಿ. ಶ್ರೀರಾಮುಲು)
ಮಾನ್ಯ ಸಮಾಜ ಕಲ್ಯಾಣ ಸಚಿವರು.

ಪ್ರಶ್ನೆ ಸಂಖ್ಯೆ: 177ಕ್ಕೆ ಸಂಬಂಧಿಸಿದಂತೆ ಮಂಡ್ಯ ಜಿಲ್ಲೆಯಲ್ಲಿ ಅಪೂರ್ಣಗೊಂಡಿರುವ ಡಾ॥ ಬಿ.ಆರ್ ಅಂಬೇಡ್ಕರ್ ಮತ್ತು ಡಾ॥ ಬಾಬು ಜಗಜೀವನರಾಮ್ ಭವನಗಳ ತಾಲ್ಲೂಕುವಾರು ಮಾಹಿತಿಗೆ ಅನುಬಂಧ

| ಕ್ರ.ಸಂ | ತಾಲ್ಲೂಕು | ಅಪೂರ್ಣಗೊಂಡ | | |
|---|---|---|---|---|
| | | ಡಾ॥ ಬಿ.ಆರ್ ಅಂಬೇಡ್ಕರ್ ಭವನಗಳ ಸಂಖ್ಯೆ | ಡಾ॥ ಬಾಬು ಜಗಜೀವನರಾಮ್ ಭವನಗಳ ಸಂಖ್ಯೆ | ಒಟ್ಟು ಭವನಗಳ ಸಂಖ್ಯೆ |
| 1 | ನಾಗಮಂಗಲ | 13 | 2 | 15 |
| 2 | ಪಾಂಡವಪುರ | 17 | 3 | 20 |
| 3 | ಶ್ರೀರಂಗಪಟ್ಟಣ | 2 | 3 | 5 |
| 4 | ಮಳವಳ್ಳಿ | 7 | 2 | 9 |
| 5 | ಮಂಡ್ಯ | 21 | 5 | 26 |
| 6 | ಮದ್ದೂರು | 20 | 4 | 24 |
| 7 | ಕೃಷ್ಣರಾಜಪೇಟೆ | 5 | 2 | 7 |
| ಒಟ್ಟು | | 85 | 21 | 106 |